# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 244 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಅಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು |
| ಉತ್ತರಿಸುವ ದಿನಾಂಕ | 22/09/2020 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಈ ಬಾರಿ ಸಾಕಷ್ಟು ಮಳೆಯಾಗಿದ್ದು, ರೈತರು ಬಿತ್ತನೆಗಾಗಿ ತಯಾರಾಗಿದ್ದು, ರಸಗೊಬ್ಬರದ ಕೊರತೆಯಿಂದ ಕಂಗಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಉತ್ತರ ಕರ್ನಾಟಕ ಭಾಗದ ಹಲವಾರು ಜಿಲ್ಲೆಗಳಲ್ಲಿ ಯೂರಿಯಾ ಕೊರತೆಯಿಂದಾಗಿ ರೈತರು ಹಗಲಿರುಳು ಸಂಬಂಧಿಸಿದ ಸಂಸ್ಥೆಗಳ ಬಳಿ ಕಾಯುತ್ತಿದ್ದು, ಇದನ್ನು ನಿವಾರಿಸುವ ನಿಟ್ಟಿನಲ್ಲಿ ಸರ್ಕಾರದಿಂದ ಯಾವ ಕ್ರಮ ಕೈಗೊಂಡಿದೆ: | ಪ್ರಸಕ್ತ ಮುಂಗಾರಿನಲ್ಲಿ ಸಕಾಲದಲ್ಲಿ ಉತ್ತಮ ಮಳೆಯಾದ ಕಾರಣ ಹೆಚ್ಚಿನ ಪ್ರದೇಶದಲ್ಲಿ ಏಕ ಕಾಲದಲ್ಲಿ ಬಿತ್ತನೆಯಾಗಿದ್ದು ಯೂರಿಯಾ ರಸಗೊಬ್ಬರಕ್ಕೆ ಹೆಚ್ಚಿನ ಬೇಡಿಕೆ ಬಂದಿರುತ್ತದೆ.<br>ಜಿಲ್ಲೆಯ ಬೇಡಿಕೆಯನ್ವಯ ಯೂರಿಯಾ ರಸಗೊಬ್ಬರದ ಸರಬರಾಜಿಗೆ ವಹಿಸಿದ ಕ್ರಮಗಳು:<br>➢ ಪ್ರತಿ ಹಂಗಾಮಿನ ಪೂರ್ವದಲ್ಲಿಯೇ ರಸಗೊಬ್ಬರಗಳನ್ನು ಜಿಲ್ಲೆಗಳಿಂದ ನೀಡುವ ಬೇಡಿಕೆಯಂತೆ ಕೇಂದ್ರ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಲಾಗುತ್ತದೆ. ಕೇಂದ್ರ ಸರ್ಕಾರದಿಂದ ಮಾಹೆವಾರು ಹಂಚಿಕೆ ಮಾಡಲಾಗುವ ವಿವಿಧ ರಸಗೊಬ್ಬರಗಳನ್ನು ಜಿಲ್ಲಾವಾರು ಬೇಡಿಕೆಗನುಗುಣವಾಗಿ ನಿಗಧಿಪಡಿಸಿ, ರಸಗೊಬ್ಬರ ತಯಾರಕಾ ಸಂಸ್ಥೆಯವರಿಂದ ನೇರವಾಗಿ ಮಹಾಮಂಡಳ, ಸಹಕಾರ ಸಂಘಗಳು ಹಾಗು ಚಿಲ್ಲರೆ ಪರಿಕರ ಮಾರಾಟಗಾರರ ಮುಖಾಂತರ ಸಮರ್ಪಕ ರೀತಿಯಲ್ಲಿ ರೈತರಿಗೆ ವಿತರಿಸಲು ಕ್ರಮ ವಹಿಸಲಾಗಿದೆ.<br>➢ ರಾಜ್ಯದಲ್ಲಿ ಮುಂಗಾರು ಹಂಗಾಮಿಗೆ ಕಾಪು ದಾಸ್ತಾನು ಯೋಜನೆಯಡಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿಯ ಗೋದಾಮಿನಲ್ಲಿ ಅವಶ್ಯವಿರುವ ಯೂರಿಯಾ ರಸಗೊಬ್ಬರವನ್ನು ದಾಸ್ತಾನು ಮಾಡಿ ಸಮರ್ಪಕವಾಗಿ ವಿತರಣೆ ಮಾಡಲಾಗಿದೆ. |

| | | |
|---|---|---|
| | | ➢ ರಸಗೊಬ್ಬರ ತಯಾರಕ ಸಂಸ್ಥೆಗಳ ಪ್ರತಿನಿಧಿಗಳೊಡನೆ ಪ್ರತಿ ವಾರ ವಿಡಿಯೋ ಕಾನ್ಫರೆನ್ಸ್ ಮುಖಾಂತರ ಸಭೆ ನಡೆಸಿ ರಾಜ್ಯಕ್ಕೆ ರಸಗೊಬ್ಬರದ ಸಮರ್ಪಕ ನಿರ್ವಹಣೆಗೆ ಕ್ರಮವಹಿಸಲಾಗಿದೆ. ಸಭೆಯಲ್ಲಿ ಚರ್ಚಿಸಿದ ನಂತರ ರಸಗೊಬ್ಬರದ ರೇಕುಗಳು ನಿಲುಗಡೆಯಾಗಿದ್ದಲ್ಲಿ ರೈಲ್ವೆ ಇಲಾಖಾಧಿಕಾರಿಗಳೊಡನೆ ಸಂಪರ್ಕ ಪಡೆದು ರಾಜ್ಯಕ್ಕೆ ಸಕಾಲದಲ್ಲಿ ರಸಗೊಬ್ಬರ ಸರಬರಾಜಾಗಲು ಕ್ರಮವಹಿಸಿದೆ.<br>➢ ರಸಗೊಬ್ಬರವು ಅಗತ್ಯ ವಸ್ತುಗಳ ಕಾಯ್ದೆ 1955ರಡಿ ಸೇರ್ಪಡೆಯಾಗಿರುವುದರಿಂದ ಜಿಲ್ಲಾಧಿಕಾರಿಗಳು/ ಜಿಲ್ಲಾ ದಂಡಾಧಿಕಾರಿಗಳು ಜಿಲ್ಲೆಗಳಿಗೆ ಹಂಚಿಕೆಯಾಗಿರುವ ರಸಗೊಬ್ಬರಗಳ ಸರಬರಾಜು, ದಾಸ್ತಾನು, ಬೆಲೆ ಮತ್ತು ಮಾರಾಟ ನಿರ್ವಹಣೆಯ ಉಸ್ತುವಾರಿ ವಹಿಸಿರುತ್ತಾರೆ.<br>➢ ಇಲಾಖೆಯಿಂದ ಎಲ್ಲಾ ಜಿಲ್ಲಾ ಜಂಟಿ ಕೃಷಿ ನಿರ್ದೇಶಕರುಗಳಿಗೆ ಕೋವಿಡ್ ಪರಿಸ್ಥಿತಿಯಲ್ಲಿ ಅಗತ್ಯ ಸೇವೆಯನ್ನು ಸ್ಥಗಿತಗೊಳಿಸದೆ ಮುಂದುವರೆಸಲು ಮತ್ತು ರಸಗೊಬ್ಬರದ ವಿತರಣೆಗಾಗಿ ಅನುಮತಿ ಚೀಟಿಯನ್ನು ಅಧಿಕೃತ ಮಾರಾಟ/ವಿತರಕರಿಗೆ ನೀಡಿ ಕ್ರಮ ಕೈಗೊಳ್ಳಲಾಗಿದೆ.<br>➢ ಪರಿಕರಗಳ ಸಾಗಾಣಿಕೆಗೆ ವಾಹನ ಸೌಲಭ್ಯದ ಅಗತ್ಯವಿರುವುದರಿಂದ ವಾಹನ ಚಾಲಕರಿಗೆ ಅಗತ್ಯ ಸೇವೆಗಾಗಿ ಎಂದು ಚೀಟಿ ನೀಡಿ ಸೇವೆಯನ್ನು ಪಡೆಯಲು ಕ್ರಮ ವಹಿಸಿದೆ.<br>➢ ಸಹಕಾರ ಸಂಘಗಳು ಹಾಗು ಚಿಲ್ಲರೆ ಪರಿಕರ ಮಾರಾಟಗಾರರ ಮುಖಾಂತರ ಸಮರ್ಪಕ ರೀತಿಯಲ್ಲಿ ಇಲಾಖೆಯ ಅಧಿಕಾರಿಗಳ ನೇತೃತ್ವದಲ್ಲಿ ಅಗತ್ಯತೆಗೆ ಅನುಗುಣವಾಗಿ ರೈತರಿಗೆ ವಿತರಿಸಲಾಗಿದೆ<br>➢ ಕೃಷಿ ಚಟುವಟಿಕೆಗಳಿಗೆ ಅನುವಾಗುವಂತೆ, ಅಂತರ ರಾಜ್ಯ ಮತ್ತು ಜಿಲ್ಲೆಗಳ ವಾಹನಗಳ ಓಡಾಟಕ್ಕೆ ಅನುವಾಗುವಂತೆ ವಾಹನ ಚಾಲಕರಿಗೆ ಇಲಾಖೆಯ ವತಿಯಿಂದ ಗ್ರೀನ್ ಪಾಸ್‌ನ್ನು ವಿತರಿಸಲಾಗಿದೆ.<br><br>ಪ್ರಸಕ್ತ ಸಾಲಿನಲ್ಲಿ ಮುಂಗಾರು ಹಂಗಾಮಿಗೆ ರಾಜ್ಯದ ಯೂರಿಯಾ ರಸಗೊಬ್ಬರದ ಬೇಡಿಕೆ 850000 ಮೆ.ಟನ್ ಗಳಿದ್ದು, ದಿನಾಂಕ: 16.09.2020 ರ ವರೆಗೆ ಒಟ್ಟು 822498 ಮೆ.ಟನ್ ಸರಬರಾಜಾಗಿರುತ್ತದೆ. ಉಳಿಕೆ ದಾಸ್ತಾನು ಮಾಹೆಯ ಅಂತ್ಯದೊಳಗೆ ಸರಬರಾಜಾಗುತ್ತದೆ. |
| ಇ) | ರಸಗೊಬ್ಬರ ಕೊರತೆಯನ್ನು ನಿವಾರಿಸಲು ಸರ್ಕಾರವು ಪ್ರತಿ ವರ್ಷದಂತೆ ಈ ವರ್ಷವೂ ಕೂಡಾ ಗೊಬ್ಬರದ ದಾಸ್ತಾನನ್ನು ಮಾಡಿಕೊಂಡಿದೆಯೇ; | ಹೌದು |

| | | |
|---|---|---|
| ಈ) | ಗೊಬ್ಬರದ ದಾಸ್ತಾನು ಸಾಕಷ್ಟಿದ್ದು, ವ್ಯಾಪಾರಿಗಳು ಕೃತಕ ಕೊರತೆಯನ್ನು ನಿರ್ಮಾಣ ಮಾಡಿ ಅದರಿಂದ ಲಾಭವನ್ನು ಪಡೆದುಕೊಳ್ಳುತ್ತಿರುವ ಬಗ್ಗೆ ವರದಿಯಾಗಿದ್ದು, ಇದರ ಬಗ್ಗೆ ಸರ್ಕಾರದ ನಿಲುವೇನು; | ಪ್ರತಿ ಜಿಲ್ಲೆಯಲ್ಲಿಯೂ ಸಹಾಯಕ ಕೃಷಿ ನಿರ್ದೇಶಕರ ನೇತೃತ್ವದಲ್ಲಿ ವಿಜಿಲೆನ್ಸ್ ತಂಡಗಳನ್ನು ರಚಿಸಲಾಗಿದ್ದು, ತಂಡದ ಸದಸ್ಯರು ಮತ್ತು ರಾಜ್ಯದಲ್ಲಿ ಅಧಿಸೂಚಿಸಿರುವ ರಸಗೊಬ್ಬರ ಪರಿವೀಕ್ಷಕರು ಅವರ ವ್ಯಾಪ್ತಿಯಲ್ಲಿನ ರಸಗೊಬ್ಬರ ಮಾರಾಟ ಮಳಿಗೆಗಳಿಗೆ ಭೇಟಿ ನೀಡಿ ಮಾರಾಟ ಮಳಿಗೆಗಳು ನಿಗದಿತ ದರಕ್ಕಿಂತ ಹೆಚ್ಚಿನ ಮಾರಾಟ ದರಕ್ಕೆ ಮಾರಾಟ ಮಾಡುವುದು ಮತ್ತು ಕೃತಕ ಅಭಾವ ಸೃಷ್ಟಿಯಾಗುವುದನ್ನು ತಡೆಯಲು ಮಳಿಗೆದಾರರ ಮೇಲೆ ರಸಗೊಬ್ಬರ ನಿಯಂತ್ರಣ ಆದೇಶ 1985 ರನ್ವಯ ಸೂಕ್ತ ಕ್ರಮ ವಹಿಸಲಾಗುತ್ತಿದೆ.<br>ಪ್ರಸಕ್ತ ಮುಂಗಾರು ಹಂಗಾಮಿನಲ್ಲಿ ರಾಜ್ಯದಲ್ಲಿ ಇಲಾಖೆಯ ರಸಗೊಬ್ಬರ ಪರಿವೀಕ್ಷಕರು ಮಳಿಗೆಗಳ ತಪಾಸಣೆ ನಡೆಸಿ ಯೂರಿಯಾ ರಸಗೊಬ್ಬರವನ್ನು ಹೆಚ್ಚಿನ ದರದಲ್ಲಿ ಮಾರಾಟ ಮಾಡುತ್ತಿರುವ 149 ರಸಗೊಬ್ಬರ ಮಳಿಗೆದಾರರ ಪರವಾನಗಿಯನ್ನು ಅಮಾನತು /ರದ್ದುಗೊಳಿಸಲಾಗಿದೆ. |
| ಉ) | ಮೇಲಿನ ಎಲ್ಲಾ ಸಮಸ್ಯೆಗಳ ಪರಿಹಾರಕ್ಕಾಗಿ ಸರ್ಕಾರ ತೆಗೆದುಕೊಂಡ ಕ್ರಮಗಳಾವುವು? | ಮೇಲಿನ ಎಲ್ಲಾ ಸಮಸ್ಯೆಗಳ ಪರಿಹಾರಕ್ಕೆ (ಅ) ಮತ್ತು (ಈ) ಉತ್ತರಗಳಲ್ಲಿ ತಿಳಿಸಿರುವಂತೆ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. |

**ಸಂಖ್ಯೆ: AGRI-ACT/162/ 2020**

(ಬಿ.ಸಿ. ಪಾಟೀಲ್)
**ಕೃಷಿ ಸಚಿವರು**